# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 32 |
| ಸದಸ್ಯರ ಹೆಸರು | ಶ್ರೀ ಅರವಿಂದ ಕುಮಾರ್ ಅರಳಿ<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 13.12.2021. |
| ಉತ್ತರಿಸುವ ಸಚಿವರು | ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯಲ್ಲಿ ನಿರ್ಮಾಣವಾಗುತ್ತಿರುವ ಕನ್ನಡ ಭವನ ಕಟ್ಟಡಕ್ಕೆ ಯಾವ ಯೋಜನೆಯಿಂದ/ಯಾವ ಇಲಾಖೆಯಿಂದ ಅನುದಾನ ಮಂಜೂರು ಮಾಡಲಾಗಿದೆ; | ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆದೇಶ ಸಂಖ್ಯೆ: ಕಸಂವಾ 9 ಕೆಬಿಎಲ್ ಆಕ 2019, ದಿನಾಂಕ: 08.11.2019ರ ಆದೇಶದಂ 2019-20ನೇ ಸಾಲಿಗೆ ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರದಿಂದ ಬೀದರ್ ಜಿಲ್ಲೆಯ ಚಿಕಪೇಟ ಹತ್ತಿರ ಕನ್ನಡ ಭವ ನಿರ್ಮಾಣಕ್ಕಾಗಿ ಅನುದಾನ ಮಂಜೂರು ಮಾಡಲಾಗಿದೆ. |
| ಆ) | ಮಂಜೂರು ಮಾಡಿದ್ದಲ್ಲಿ, ಎಷ್ಟು ಹಣ ಮಂಜೂರಾಗಿದೆ; ಇಲ್ಲಿಯವರೆಗೆ ಎಷ್ಟು ಅನುದಾನ ಬಿಡುಗಡೆಯಾಗಿದೆ; ಖರ್ಚಾಗಿರುವ ಮೊತ್ತವೆಷ್ಟು; (ವಿವರವಾದ ಮಾಹಿತಿ ಒದಗಿಸುವುದು) | ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರದಿಂದ ಸದರಿ ಕನ್ನ ಭವನ ನಿರ್ಮಾಣಕ್ಕೆ ಬಿಡುಗಡೆ ಮಾಡಲಾಗಿರುವ ಅನುದಾನದ ವಿವ ಈ ಕೆಳಕಂಡಂತಿದೆ.<br>(ರೂ.ಲಕ್ಷಗಳಲ್ಲಿ<br>ಕ್ರ. ಸಂ. \| ಮಂಜೂರಾದ ಅನುದಾನ \| ಬಿಡುಗಡೆ ಯಾದ ಅನುದಾನ \| ಖರ್ಚಾದ ಅನುದಾನ<br>1 \| 200.00 \| 100.00 \| 100.00<br>ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ ಇಲಾ ಉಪ ವಿಭಾಗ, ನಂ.1, ಬೀದರ್, ಇವರು ಯೋಜನೆ ಅನುಷ್ಠಾನಾಧಿಕಾರಿಯಾಗಿದ್ದು, ಮೊದಲನೇ ಕಂತಿನ ಅನುದಾ ರೂ.1.00 ಕೋಟಿಗಳಿಗೆ ಹಣಬಳಕೆ ಪ್ರಮಾಣ ಪತ್ರ ಹಾಗ ಕಾಮಗಾರಿಯು ಪ್ರಗತಿ ಹಂತದಲ್ಲಿರುವ ಕಟ್ಟಡದ ಪ್ರಗತಿಯನು ಜಿಲ್ಲಾಧಿಕಾರಿ, ಬೀದರ್ ಜಿಲ್ಲೆ, ಇವರ ಪತ್ರ ಸಂಖ್ಯೆ: ಬಿಎಡಿಪಿ/ಸಿಆರ 2019-20, ದಿ: 20.09.2021ರಂದು ಹಣಬಳಕೆ ಪ್ರಮಾಣ ಪತ್ರವನು ಸಲ್ಲಿಸಿರುತ್ತಾರೆ. ಅನುಬಂಧದಲ್ಲಿ ಇರಿಸಿದೆ. |
| ಇ) | ಈ ಕನ್ನಡ ಭವನದ ಕಟ್ಟಡ ಕಾಮಗಾರಿಗೆ ಬಂದ ಅನುದಾನಕ್ಕೆ ಯಾರು ಉಸ್ತುವಾರಿಯಾಗಿರುತ್ತಾರೆ? | ಸದರಿ ಕನ್ನಡ ಭವನ ಕಟ್ಟಡ ಕಾಮಗಾರಿಗೆ ಜಿಲ್ಲಾಧಿಕಾರಿ, ಬೀದ ಜಿಲ್ಲೆ, ಇವರು ಉಸ್ತುವಾರಿಯಾಗಿರುತ್ತಾರೆ. |

ಸಂಖ್ಯೆ: ಕಸಂವಾ 77 ಕವಿಸ 2021.

(ವಿ. ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು.



ಕರ್ನಾಟಕ ಸರ್ಕಾರ

ಜಿಲ್ಲಾಧಿಕಾರಿಗಳ ಕಾರ್ಯಾಲಯ ಬೀದರ ಜಿಲ್ಲೆ , ಬೀದರ್

**Office of the Deputy Commissioner, Bidar District, Bidar-585401, Karnataka**

**Phone: 08482-225409 Fax: 08482-225262** **Email: deo.bidar@gmail.com**

ಸಂಖ್ಯೆ:ಬಿಎಡಿಪಿ/:ಸಿಆರ್- :2019-20 ದಿನಾಂಕ: 20-09-2021

ಇವರಿಗೆ,

ಮಾನ್ಯ ಕಾರ್ಯದರ್ಶಿ,
ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ
ಕೊಠಡಿ ಸಂಖ್ಯೆ 107 ಬಹುಮಹಡಿ ಕಟ್ಟಡ
(ಕ್ಯಾಂಟೀನ್ ಹಿಂಭಾಗ) ಡಾ. ಅಂಬೇಡ್ಕರ್ ವೀದಿ
ಬೆಂಗಳೂರು.

ಮಾನ್ಯರೆ,

ವಿಷಯ ಬೀದರ ಜಿಲ್ಲೆಯ ಚಿಕಪೇಟ ಹತ್ತಿರದ ಕನ್ನಡ ಭವನ ಕಟ್ಟಡ ನಿರ್ಮಾಣ ಕಾಮಗಾರಿ ತುರ್ತು ಅನುಷ್ಠಾನಕ್ಕಾಗಿ ಮಂಜುರಾದ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವ ಕುರಿತು.

ಉಲ್ಲೇಖ 1. ಮಾನ್ಯ ಸರ್ಕಾರದ ಆದೇಶ ಸಂಖ್ಯೆ ಕಸಂವಾ 110 ಕೆಒಎಲ್ ಆಕ 2021 ಬೆಂಗಳೂರು ದಿನಾಂಕ 04.09.2021.
2.ಈ ಕಛೇರಿ ಪತ್ರ ಸಮ ಸಂಖ್ಯೆ ದಿನಾಂಕ 14.07.2021.

******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಬೀದರ ಜಿಲ್ಲೆಯ ಚಿಕಪೇಟ ಹತ್ತಿರದ ಕನ್ನಡ ಭವನ ನಿರ್ಮಾಣ ಕಾಮಗಾರಿಗೆ ರೂ 200.00 ಲಕ್ಷದ ಅಂದಾಜು ಪತ್ರಿಕೆಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಮೊದಲನೆ ಕಂತಾಗಿ ರೂ 1.00 ಕೋಟಿ ಅನುದಾನ ಬಿಡುಗಡೆ ಮಾಡಲಾಗಿರುತ್ತದೆ. ಈ ಹಿನ್ನಲೆಯಲ್ಲಿ ಪ್ರಸ್ತುತ ಬಾಕಿ ಉಳಿದಿರುವ ರೂ1.00 ಕೋಟಿ ಅನುದಾನ ಬಿಡುಗಡೆ ಮಾಡಲು ಈಗಾಗಲೆ ಬಿಡುಗಡೆ ಮಾಡಲಾದ ಅನುದಾನದ ಹಣ ಬಳಕೆ ಪ್ರಮಾಣ ಪತ್ರ ಮತ್ತು ಕಾಮಗಾರಿಯ ಪ್ರಸ್ತುತ ಹಂತದ ಜಿ.ಪಿ.ಎಸ್ ಪೋಟೋ ಹಾಗೂ ಅಗತ್ಯ ದಾಖಲೆಗಳನ್ನು ಪಡೆದು ಸಲ್ಲಿಸಲು ಕೋರಿರುತ್ತಾರೆ.

ಪ್ರಯುಕ್ತ ಸದರಿ ಕಾಮಗಾರಿಗೆ ಈಗಾಗಲೆ ಬಿಡುಗಡೆ ಮಾಡಲಾದ ಮೊದಲನೆ ಕಂತಿನ ಅನುದಾನ ರೂ 1.00 ಕೋಟಿ ಹಣ ಬಳಕೆ ಪ್ರಮಾಣ ಪತ್ರ ಮತ್ತು ಪ್ರಸ್ತುತ ಜಿ.ಪಿ.ಎಸ್ ಪೋಟೋಗಳನ್ನು ಈ ಪತ್ರದೊಂದಿಗೆ ಅಡಕಗೊಳಿಸಿ ಸಲ್ಲಿಸುತ್ತ, ಎರಡನೇ ಕಂತಿನ ಅನುದಾನ ರೂ 1.00 ಕೋಟಿ ಬಿಡುಗಡೆ ಮಾಡಲು ಈ ಮೂಲಕ ಮಾನ್ಯರಲ್ಲಿ ಗೌರವಪೂರ್ವಕವಾಗಿ ಕೋರಿದೆ.

ತಮ್ಮ ವಿಶ್ವಾಸಿ

ಜಿಲ್ಲಾಧಿಕಾರಿ,
ಬೀದರ ಜಿಲ್ಲೆ,ಬೀದರ.

21/9/2021

ಪ್ರತಿಯನ್ನು

ಮಾನ್ಯ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ) ಕನ್ನಡ ಭವನ ಜೆ.ಸಿ ರಸ್ತೆ ಬೆಂಗಳೂರು ರವರ ದಯಪತ ಮಾಹಿತಿಗಾಗಿ.



ಕ ಸರ್ಕಾರ
ಯೋಗಿ ಇಲಾಖೆ)

ಸಂ: ಕಾನಿಇಂ:ಲೋಇ:ಬೀವಿ:ಕಿಇ-3:2021-22: 910

ಕಾರ್ಯನಿರ್ವಾಹಕ ಇಂಜಿನೀಯರವರ ಕಚೇರಿ,
ಲೋಕೋಪಯೋಗಿ ಇಲಾಖೆ, ವಿಭಾಗ ಬೀದರ್.
ದಿನಾಂಕ: 13 JUL 2021

ಇವರಿಗೆ,
ಮಾನ್ಯ ಜಿಲ್ಲಾಧಿಕಾರಿಗಳು,
ಬೀದರ್ ಜಿಲ್ಲೆ,
ಬೀದರ್.

ಮಾನ್ಯರೇ,

ವಿಷಯ:- ಉಪಯುಕ್ತತಾ ಪ್ರಮಾಣ ಪತ್ರ ಸಲ್ಲಿಸುವ ಕುರಿತು.

ಉಲ್ಲೇಖ:- 1 ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧೀಕಾರ ಬೆಂಗಳೂರು ರವರ ನಡವಳಿ ಸಂ: ಕಗಅಪ್ರಾ/27/2019-20 ದಿ: 09.01.2020

2 ತಮ್ಮ ಕಛೇರಿ ಪತ್ರ ಸಂ: 1373 ದಿ: 12.07.2021.

:::

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಬೀದರ್ ಜಿಲ್ಲೆಯ ನಗರದ ಚಿಟ್ಟಾವಾಡಿ ಹತ್ತಿರ ಜಿಲ್ಲಾಡಳಿತವು ಕನ್ನಡ ಭವನ ನಿರ್ಮಾಣಕ್ಕೆ ಮಂಜೂರು ಮಾಡಿರುವ ಒಂದು ಎಕರೆ ಜಮೀನಿನಲ್ಲಿ ಕನ್ನಡ ಭವನ ನಿರ್ಮಾಣ ಕಾಮಗಾರಿಯ ರೂ: 200 ಲಕ್ಷಗಳಿಗೆ ಉಲ್ಲೇಖ-(1) ರನ್ವಯ ಆಡಳಿತಾತ್ಮಕ ಅನುಮೋದನೆ ದೊರಕಿದೆ. ಸದರಿ ಕಾಮಗಾರಿಯನ್ನು ಗುತ್ತಿಗೆ ಆಧಾರದ ಮೇಲೆ ಶ್ರೀ. ಸಚಿನ ಕೊಳ್ಳೂರ್ ಇವರಿಗೆ ವಹಿಸಲಾಗಿದೆ. ಈ ಕಾಮಗಾರಿಯು ಮುಗಿಯುವ ಹಂತದಲ್ಲಿದ್ದು, ತಾವೂ ಬಿಡುಗಡೆ ಮಾಡಿದ ರೂ: 100.00 ಲಕ್ಷಗಳ ಮೊತ್ತದ ವೆಚ್ಚವನ್ನು ಮಾಡಲಾಗಿದ್ದು, ಇದರ ಉಪಯುಕ್ತತಾ ಪ್ರಮಾಣ ಪತ್ರವನ್ನು ಈ ಪತ್ರದೊಂದಿಗೆ ಲಗತ್ತಿಸಲಾಗಿದೆ.

ಆದುದ್ದರಿಂದ ಸದರಿ ಕಾಮಗಾರಿಯ ಉಪಯುಕ್ತತಾ ಪ್ರಮಾಣ ಪತ್ರವನ್ನು ಈ ಮೂಲಕ ತಮ್ಮ ದಯಾಪರ ಮಾಹಿತಿಗಾಗಿ ಮತ್ತು ಸೂಕ್ತ ಕ್ರಮಕ್ಕಾಗಿ ಸಲ್ಲಿಸಿದೆ.

ಅಡಕ:- ಉಪಯುಕ್ತತಾ ಪ್ರಮಾಣ ಪತ್ರ

ತಮ್ಮ ವಿಶ್ವಾಸಿ,

ಕಾರ್ಯನಿರ್ವಾಹಕ ಇಂಜಿನಿಯರರು,
ಲೋಕೋಪಯೋಗಿ ಇಲಾಖೆ ವಿಭಾಗ ಬೀದರ.